ಪರ್ಯಾಯ ಶ್ರೀ ಸೋದೆ ವಾದಿರಾಜ ಮಠ
ಶ್ರೀ ಕೃಷ್ಣ ಮಠ, ಉಡುಪಿ
Phone : 0820-2520598
E-mail: paryaya@sode-edu.in



paryaya shri sode vadiraja matha
Sri Krishna Matha, Udupi
Phone : 0820-2520598
Website: www.sodevadirajamutt.in

**04 Aug 2013.**

॥ ಶ್ರೀಃ ॥
॥ ಶ್ರೀಮಧ್ವೇಶಹಯವದನಾಯ ನಮ: ॥
॥ಶ್ರೀಗುರುರಾಜೋ ವಿಜಯತೇತರಾಮ್ ॥

ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥

ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ॥

ಭಾವಿಸಮೀರರಾದ ಶ್ರೀವಾದಿರಾಜರು ತಮ್ಮ ವೃಂದಾವನಪ್ರವೇಶಾನಂತರ ಅಕುಶಲನಂತೆ ಕಾಣುವ ಒಬ್ಬ ಏಡಮೂಕದೇಶೀಯ ಬ್ರಾಹ್ಮಣರ ಸ್ವಪ್ನದಲ್ಲಿ ಮುಕ್ತಿಪ್ರದವಾದ "ಶ್ರೀಮತ್ಸ್ವಾಪ್ನ ವೃಂದಾವನಾಖ್ಯಾನ" ಗ್ರಂಥವನ್ನು ಉಪದೇಶಿಸಿದರು. ಈ ಗ್ರಂಥವು ಶ್ರೀಗುರುರಾಜರ ಋಜುತ್ವ ಮಹಿಮಾಬೋಧಕವಷ್ಟೇ ಅಲ್ಲದೆ, ಶ್ರೀಹರಿಸರ್ವೋತ್ತಮತ್ವ, ವಾಯುಜೀವೋತ್ತಮತ್ವ, ಪಂಚಭೇದ, ತಾರತಮ್ಯ ಇತ್ಯಾದ್ಯನೇಕ ಮಧ್ವ–ಸಿದ್ಧಾಂತದ ಪ್ರಮೇಯಗಳನ್ನೊಳಗೊಂಡು ವಿರಾಜಮಾನವಾಗಿದೆ. ಮತ್ತು ಶ್ರುತಿಲಿಂಗಗಳಿಂದ ಸನಾಥಿತ–ವಾಗಿದೆ.

ಆ ಏಡಮೂಕದೇಶೀಯಬ್ರಾಹ್ಮಣನೇ ಪುನ: ನಮ್ಮ ಮಠದ ಪೀಠಾಧಿಪತಿಗಳಾಗಿ ಅವತರಿಸಿಬಂದ ಮಹಾವೈರಾಗ್ಯಶಾಲಿಗಳಾದ ಶ್ರೀವೃಂದಾವನಾಚಾರ್ಯರು ಎಂದೇ ಪ್ರಸಿದ್ಧರಾದ ಶ್ರೀವಿಶ್ವಪ್ರಿಯತೀರ್ಥ–ಶ್ರೀಪಾದಂಗಳವರು. ಅವರು ಈ ಗ್ರಂಥವನ್ನು ವಿಶೇಷಾರ್ಥಸಹಿತ ಪ್ರವಚನಾದಿಗಳನ್ನು ಮಾಡುವ ಮೂಲಕ ತಮ್ಮಕಾಲದಲ್ಲಿ ಪ್ರಸಿದ್ಧಿಪಡಿಸಿ ಭಕ್ತರ ಅಧ್ಯಯನಾನುಕೂಲಕ್ಕಾಗಿ ಸ್ವತಃ ತಮ್ಮ ಶಿಷ್ಯರುಗಳ ಮೂಲಕ ಆಖ್ಯಾನದ ಅನೇಕ ಪ್ರತಿಗಳನ್ನು ಬರೆಸಿ ಸಾಧಕರಿಗೆ ಅನುಗ್ರಹಪೂರ್ವಕ ವಿತರಿಸಿದರು.

ನಂತರ ಶ್ರೀವೃಂದಾವನಾಚಾರ್ಯರ ಶಿಷ್ಯರೇ ಆದ ಶ್ರೀಮುಷ್ಣಾಚಾರ್ಯರು ಪ್ರಮೇಯ ಗರ್ಭಿತವಾದ ಅತಿಗಹನವಾದ ಈ ಗ್ರಂಥರತ್ನಕ್ಕೆ ಸಂಸ್ಕೃತದಲ್ಲಿ ಪರಮಾದ್ಭುತವಾದ ವ್ಯಾಖ್ಯಾನವನ್ನು ರಚಿಸಿದರು.

ಈ ವ್ಯಾಖ್ಯಾನದ ಸಹಿತವಾಗಿ ವೃಂದಾವನಾಖ್ಯಾನದ ಪ್ರತಿಗಳನ್ನು ನಮ್ಮ ಸಂಸ್ಥಾನವನ್ನು ಅಲಂಕರಿಸಿದ್ದ ಶ್ರೀಶ್ರೀವಿಶ್ವಾಧೀಶತೀರ್ಥಶ್ರೀಪಾದಂಗಳವರು, ಶ್ರೀವಿಶ್ವೇಂದ್ರತೀರ್ಥ ಶ್ರೀಪಾದಂಗಳವರು ಹಾಗೂ ನಮ್ಮ ಪೂಜ್ಯ ಗುರುಗಳಾದ ಶ್ರೀಶ್ರೀವಿಶ್ವೋತ್ತಮತೀರ್ಥ ಶ್ರೀಪಾದಂಗಳವರು ತಮ್ಮ ಶಿಷ್ಯರುಗಳ ಮೂಲಕ ಪುನ: ಅನೇಕ ಶುದ್ಧವಾದ ಹಸ್ತಪ್ರತಿಗಳನ್ನು ಮಾಡಿಸಿ ಸಂರಕ್ಷಿಸಿದರು.

ಪರ್ಯಾಯ ಶ್ರೀ ಸೋದೆ ವಾದಿರಾಜ ಮಠ
ಶ್ರೀ ಕೃಷ್ಣ ಮಠ, ಉಡುಪಿ
Phone : 0820-2520598
E-mail: paryaya@sode-edu.in



paryaya shri sode vadiraja matha
Sri Krishna Matha, Udupi
Phone : 0820-2520598
Website: www.sodevadirajamutt.in

ನಮ್ಮ ಪೂಜ್ಯ ಗುರುಗಳಾದ ಶ್ರೀಶ್ರೀವಿಶ್ವೋತ್ತಮತೀರ್ಥಶ್ರೀಪಾದಂಗಳವರು ಅಪ್ಪಣೆಕೊಟ್ಟಿರುವಂತೆ

## ಶ್ರೀನೃಸಿಂಹೋಪದಿಷ್ಟಪಂಚವೃಂದಾವನಾಖ್ಯಾನ

("ವೃಂದಾವನಾಖ್ಯಾನ"ಗ್ರಂಥವು ನರಸಿಂಹದೇವರಿಂದ ಉಪದೇಶಿಸಲ್ಪಟ್ಟದ್ದು)

"ಪಂಚಾಸ್ಯವಾಕ್ಯಸಂದಿಷ್ಟಂ ಪುರಾಣಂ ಪಂಚಲಕ್ಷಣಮ್"

ಇತಿ ವೃಂದಾವನಾಖ್ಯಾನಮ್(೭/೧೧೪)

"ಪಂಚವೃಂದಾವನೇ ಪುಣ್ಯೇ ಪುರಾಣಂ ಪಂಚಲಕ್ಷಣಮ್ ।
ಪಂಚಾಸ್ಯವಾಕ್ಯ ಸಂದಿಷ್ಟಂ ತ್ವಂ ಚ ಕಾರಯ ಭೂರಿಶ: ॥" (೭/೧೧೪)

(ಪಂಚಲಕ್ಷಣಂ ಪುರಾಣಮ್ = ಪಂಚವೃಂದಾವನಾಖ್ಯಾನಮ್, ಕೇನ ಸಮುಪದಿಷ್ಟಂ? ಇತಿ ಚೇತ್, ಪಂಚಾಸ್ಯವಾಕ್ಯಸಂದಿಷ್ಟಮ್ = "ಸಿಂಹಂ ನಸಂತ"ಶ್ರುತಿ ಪ್ರತಿಪಾದ್ಯೇನ ಶ್ರೀನೃಸಿಂಹೇನ ಸಮುಪದಿಷ್ಟಮ್) ಎಂದು ಶ್ರೀವಾದಿರಾಜರೇ ಶ್ರೀಸ್ವಾಪ್ನವೃಂದಾವನಾಖ್ಯಾನದಲ್ಲಿ ಅಪ್ಪಣೆ ಕೊಟ್ಟಿರುವಂತೆ ಸರ್ಗಪ್ರತಿಸರ್ಗಾದಿ ಪಂಚಲಕ್ಷಣಯುಕ್ತವಾದ ಶ್ರೀಸ್ವಾಪ್ನವೃಂದಾವನಾಖ್ಯಾನವೇ ಪಂಚವೃಂದಾವನಾಖ್ಯಾನವು ಎಂದು ಕರೆಯಲ್ಪಡುವುದು.

"ಭಾವಿಮಧ್ವರೂ, ನಿತ್ಯರೂ, ವೈದಿಕಾಚಾರ್ಯರೂ, "ಸ್ವಪ್ನ"ಶಬ್ದವಾಚ್ಯರೂ ಆದ ಶ್ರೀವಾದಿರಾಜರಿಗೆ, ಸರ್ವೋತ್ತಮನಾದ "ಸ್ವಪ್ನ"ಶಬ್ದವಾಚ್ಯನಾದ ಶ್ರೀನೃಸಿಂಹದೇವರು ಪ್ರಹ್ಲಾದನಿಗಾಗಿ ಸಭಾಮಧ್ಯದಲ್ಲಿ ಸ್ತಂಭದಿಂದ ಪ್ರಾದುರ್ಭವಿಸಿದ ಸಮಯದಲ್ಲಿ ಸದ್ಯ: ಮಾಡಿದ ಉಪದೇಶವೇ ಪುರುಷಸೂಕ್ತಕ್ಕೆ ಸಮವಾದ ಹಯಗ್ರೀವವಿದ್ಯಾತ್ಮಕ "ಶ್ರೀಪಂಚವೃಂದಾವನಾಖ್ಯಾನ" ಗ್ರಂಥವು ಎಂದು ಋಗ್ವೇದದ "ಸಿಂಹಂ ನಸಂತ" ಶ್ರುತಿಯಿಂದ ಸಿದ್ಧವಾಗುತ್ತದೆ".

ಈ ಪಂಚವೃಂದಾವನಾಖ್ಯಾನವೇ "ಸ್ವಪ್ನ"ಶಬ್ದವಾಚ್ಯರಾದ ಶ್ರೀವಾದಿರಾಜರು (ಸು ಅಪ್ ನ: ಸ್ವಪ್ನ: = ಸರ್ವಜ್ಞ:) ("ಸ್ವಪ್ನ ಸ್ವಪ್ನಾಧಿಕರಣೇ" ಇತಿ ಶ್ರುತೇ:) ಬ್ರಾಹ್ಮಣನಿಗೆ ಸ್ವಪ್ನಮುಖೇನ ಪುನ: ಉಪದೇಶಮಾಡಿದ ಕಾರಣ "ಸ್ವಪ್ನವೃಂದಾವನಾಖ್ಯಾನ"ವೆಂದೂ ಜಗತ್ಪ್ರಖ್ಯಾತವಾಯಿತು.

ಅತ ಏವ "ಶ್ರೀನೃಸಿಂಹನಿಂದ ಉಪದಿಷ್ಟವಾದದ್ದು ಎಂದು ನಿತ್ಯವಾದ ವೇದದಲ್ಲಿ ವರ್ಣಿತವಾದ ಕಾರಣ ಶ್ರೀಸ್ವಪ್ನವೃಂದಾವನಾಖ್ಯಾನವು ಸ್ವತ:ಪ್ರಮಾಣವು ಮತ್ತು ನಿತ್ಯವು" ಎಂದು ಸಿದ್ಧವಾಗುವುದು.

ತಥಾ ಹಿ ಋಕ್ (೯-೮೯-೩)

"ಸಿಂಹಂ ನಸಂತ ಮಧ್ವೋ ಅಯಾಸಂ ಹರಿಮರುಷಂ ದಿವೋ ಅಸ್ಯ ಪತಿಮ್ ।
ಶೂರೋ ಯುತ್ಸು ಪ್ರಥಮ: ಪೃಚ್ಛತೇ ಗಾ ಅಸ್ಯ ಚಕ್ಷಸಾ ಪರಿ ಪಾತ್ಯುಕ್ಷಾ ॥" ಇತಿ





ಪಂಚಾಸ್ಯವಾಕ್ಯ: – ಪಂಚಾಸ್ಯವಾಕ್ಯಂ = ಪಂಚಾಸ್ಯಶ್ರುತಿ: = "ಸಿಂಹಂ ನಸಂತ"ಶ್ರುತಿ:, ಪ್ರತಿಪಾದ್ಯತ್ವೇನ ಅಸ್ಯ ಅಸ್ತಿ ಇತಿ ಪಂಚಾಸ್ಯವಾಕ್ಯ: (ಮತ್ವರ್ಥೀಯೋಕಾರ:, ಅರ್ಶ ಆದಿಭ್ಯೋSಚ್ ಇತಿ ಪಾಣಿನಿ:) ಶ್ರೀನೃಸಿಂಹ:, ತೇನ ಶ್ರೀನೃಸಿಂಹೇನೈವ, ಸಂದಿಷ್ಟಂ = ಸಮುಪದಿಷ್ಟಂ, ಪುರಾಣಂ ಪಂಚಲಕ್ಷಣಂ = ಪಂಚಲಕ್ಷಣಂ ಪುರಾಣಂ = ಪಂಚ ವೃಂದಾವನಾಖ್ಯಾನಮ್ ಇತ್ಯರ್ಥ: ।

ಮಂತ್ರದ ಅನ್ವಯಾರ್ಥವು –

ಯುತ್ಸು = ವಾಗ್ಯುದ್ಧಮಾಡುವ ಪ್ರವೀಣರಲ್ಲಿ,
ಶೂರ: = ಅತ್ಯಂತ ಶೌರ್ಯಸಂಪನ್ನರಾದ,
ಪ್ರಥಮ: = ಶ್ರೀನರಸಿಂಹದೇವರ ಶಿಷ್ಯಾಗ್ರೇಸರರಾದ,
ಮಧ್ವ: = ಭಾವಿಮಧ್ವರೂ ಲಾತವ್ಯರೂ ಆದ ಶ್ರೀವಾದಿರಾಜರು ("ಭಾವಿಮಧ್ವ: ಪ್ರಕೀರ್ತಿತ:" ಎಂದು ಶ್ರೀಹಯಗ್ರೀವಪ್ರೋಕ್ತವಾದ ಋಕ್ಸಂಹಿತಾ ಗ್ರಂಥದಲ್ಲಿ ಶ್ರೀವಾದಿರಾಜರು ಭಾವಿಮಧ್ವರು ಎಂಬುವುದಾಗಿ ವರ್ಣಿತರು),

ಅಸ್ಯ = ಸಜ್ಜನವರ್ಗದ,
ದಿವ: = ಹಯಗ್ರೀವವಿದ್ಯಾತ್ಮಕಪಂಚವೃಂದಾವನಾಖ್ಯಾನಾದಿಶ್ರೇಷ್ಠಜ್ಞಾನದ,
ಪತಿಂ = ಒಡೆಯನಾದ ಅರ್ಥಾತ್ ದಾತಾರನಾದ,
ಅರುಷಂ = ಸಜ್ಜನರಲ್ಲಿ ಸದಾ ಕೋಪರಹಿತನಾದ,
ಅಯಾಸಂ = ಸಭಾಮಧ್ಯದಲ್ಲಿ ಸ್ತಂಭದಿಂದ ಪ್ರಹ್ಲಾದನಿಗಾಗಿ ಪ್ರಾಪ್ತನಾದ ಅರ್ಥಾತ್ ಪ್ರಾದುರ್ಭೂತನಾದ,
ಹರಿಂ = ದುರ್ಜನಸಂಹಾರಕನಾದ್ದರಿಂದ "ಹರಿ"ನಾಮಕನಾದ,
ನಸಂತ = ನಸಂತಂ (ಸುಪಾಂ ಸುಲುಕ್ ಇತಿ ಪಾಣಿನಿ:) ಅರ್ಥಾತ್ ವಿವೃತವಾದ ನಾಸಾಪುಟಗಳುಳ್ಳ,
ಸಿಂಹಂ = ಶ್ರೀನೃಸಿಂಹನಲ್ಲಿ (ನಾಮ್ನೈಕದೇಶೇ ನಾಮಗ್ರಹಣಮ್ – ತಾದೃಶೇ ಸರ್ವೋತ್ತಮೇ ಶ್ರೀನೃಸಿಂಹೇ, ವಿಭಕ್ತಿವ್ಯತ್ಯಯಾತ್ ಸಪ್ತಮ್ಯರ್ಥೇ ದ್ವಿತೀಯಾ ವಿಭಕ್ತಿ:),

ಗಾ: = ಪಂಚವೃಂದಾವನಾಖ್ಯಾನವೇದಾದಿಸಕಲಸಚ್ಛಾಸ್ತ್ರ"ಹಯಗ್ರೀವವಿದ್ಯೆ"ಗಳನ್ನು ಕುರಿತು ("ಹಯಗ್ರೀವಮುಖೋದ್ಗೀರ್ಣಾ ಸಾ ವಾಣೀ ಧರ್ಮಶಾಸನಮ್ । ಅತಸ್ತದುದಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯ: ॥" ಇತಿ ಯುಕ್ತಿಮಲ್ಲಿಕಾ (೧–೧೩೯) ("ಹಯಗ್ರೀವಂ ಚಿದಾನಂದ ವಿಗ್ರಹಂ ಸದನುಗ್ರಹಂ" ಇತ್ಯಾದಿ ಹಯಗ್ರೀವಸ್ತೋತ್ರಾತ್ಮಕ ಶ್ಲೋಕಗಳಿಂದ ಪ್ರಾರಂಭವಾದಕಾರಣ ಶ್ರೀಪಂಚವೃಂದಾವನಾಖ್ಯಾನ ಗ್ರಂಥಕ್ಕೆ ಶ್ರೀಹಯಗ್ರೀವವಿದ್ಯಾ ಎಂದು ಹೆಸರು),

ಪೃಚ್ಛತೇ = ಪ್ರಿಯಶಿಷ್ಯರಾಗಿ ಉಪದೇಶಹೊಂದಿ, ಪುನ:ಪುನ: ವಿಚಾರಮಾಡಿ ಸಚ್ಛಾಸ್ತ್ರವನ್ನು ನಿರ್ಣಯಿಸುತ್ತಾರೆ.





("ಶ್ರೀಲಕ್ಷ್ಮ್ಯವಕ್ಷಸೇ ರೂಕ್ಷನಖಶಿಕ್ಷಿತರಕ್ಷಸೇ ।
ಸ್ವಪಕ್ಷರಕ್ಷಾದೀಕ್ಷಾಯ ನೃಹರ್ಯಕ್ಷಾಯ ತೇ ನಮ: ॥"
ಎಂಬುವ ಶ್ರೀವಾದಿರಾಜರ ಶ್ಲೋಕವೇ ಇದಕ್ಕೆ ಸಾಕ್ಷಿ),

ಅಸ್ಯ = ಶ್ರೀನೃಸಿಂಹನ {ಶ್ರೀಹಯಗ್ರೀವವಿದ್ಯಾತ್ಮಕಶ್ರೀಪಂಚವೃಂದಾವನಾಖ್ಯಾನೋಪದೇಷ್ಟು: ಶ್ರೀನೃಸಿಂಹಸ್ಯ},

ಚಕ್ಷಸಾ = ಚಕ್ಷುಷಾ, ಜ್ಞಾನಚಕ್ಷುವಿನಿಂದ ಅರ್ಥಾತ್ ಶ್ರೀನೃಸಿಂಹೋಪದಿಷ್ಟಶ್ರೀಹಯಗ್ರೀವ ವಿದ್ಯಾತ್ಮಕಶ್ರೀಪಂಚವೃಂದಾವನಾಖ್ಯಾನಾದಿ ಜ್ಞಾನಚಕ್ಷುವಿನಿಂದ,

ಉಕ್ಷಾ = ಸರ್ವಸಾತ್ವಿಕರಿಗೆ ಪ್ರತ್ಯಕ್ಷವಾಗಿ ಮತ್ತು ಸ್ವಪ್ನಮುಖವಾಗಿ ಜ್ಞಾನಪ್ರೋಕ್ಷಣೆಯನ್ನು ಮಾಡಿ ("ನಿತ್ಯಂ ಬ್ರಾಹ್ಮಣಸಂಬಂಧಿ ಸತ್ಯಂ ವಾಕ್ಯಂ ಮಯೋದಿತಮ್", "ಕರೋಮಿ ಬ್ರಾಹ್ಮಣಮುಖಾದಾಖ್ಯಾನಂ ಶೋಕನಾಶನಮ್", ವಕ್ಷ್ಯೇ ಸ್ವಪ್ನೇಥವಾ ಸ್ವಪ್ನೋಽಪ್ಯಹಂ ತವ ದಿವಾಪ್ಯಹೋ" – ಇತಿ ವೃಂದಾವನಾಖ್ಯಾನಮ್),

ಪರಿ ಪಾತಿ = ಜಗದ್ಗುರುಗಳೂ ಭಾವಿಮಧ್ವರೂ ನಿತ್ಯರೂ ವೈದಿಕಾಚಾರ್ಯರೂ ಆದ ಶ್ರೀವಾದಿರಾಜರು ಸರ್ವತ: ಸರ್ವದಾ ಸಜ್ಜನವರ್ಗವನ್ನು ರಕ್ಷಿಸುತ್ತಾರೆ" ಎಂದು "ಸಿಂಹಂ ನಸಂತ"ಶ್ರುತ್ಯರ್ಥವು.

ಮಂತ್ರದ ತಾತ್ಪರ್ಯಾರ್ಥವು – "ಸಿಂಹಂ ನಸಂತ" ಎಂಬುವ ಶ್ರುತಿವಾಕ್ಯವು ಭಾವಿಮಧ್ವರಾದ ಶ್ರೀವಾದಿರಾಜರಿಗೆ ಶ್ರೀನೃಸಿಂಹದೇವರು ಶ್ರೀಪಂಚವೃಂದಾವನಾಖ್ಯಾನವನ್ನು ಉಪದೇಶಮಾಡಿದ ದಿವ್ಯಚರಿತ್ರೆಯನ್ನು ಕೀರ್ತಿಸುತ್ತದೆ. ಈ ಶ್ರುತಿಯಲ್ಲಿ "ಸಿಂಹಂ"ಎಂಬುವ ಶಬ್ದಕ್ಕೆ ಶ್ರೀನೃಸಿಂಹನೆಂದು, "ನಸಂತ" ಎಂಬುವ ಶಬ್ದಕ್ಕೆ "ನಸಂತಂ" ಅಂದರೆ ವಿವೃತವಾದನಾಸಾ ಪುಟಗಳುಳ್ಳ ಎಂಬುವ ಅರ್ಥದಲ್ಲಿ ಛಾಂದಸ ಪ್ರಯೋಗವಾಗುತ್ತದೆ, ದುರ್ಜನಸಂಹಾರಕನಾದ್ದರಿಂದ "ಹರಿ" ಎಂಬುವ ಶಬ್ದವು ಶ್ರೀನೃಸಿಂಹನ ಅನ್ವರ್ಥನಾಮಧೇಯವಾಗಿದೆ, ಭಕ್ತರಲ್ಲಿ ಸದಾ ಶಾಂತನಾದ ಕಾರಣದಿಂದ ಶ್ರೀನೃಸಿಂಹನು "ಅರುಷ"ನೆಂದು ಕರೆಯಲ್ಪಡುವವನು, "ಅಯಾಸಂ" ಎಂದರೆ ಪ್ರಹ್ಲಾದನಿಗಾಗಿ ಸಭಾಮಧ್ಯದಲ್ಲಿ ಸ್ತಂಭದಿಂದ ಪ್ರಕಟ–ನಾದನೆಂದು ತಾತ್ಪರ್ಯ, ಈ ಶ್ರೀನೃಸಿಂಹನು ಸಕಲಸಜ್ಜನ

ಸಮೂಹದ ಜ್ಞಾನಪ್ರಕಾಶದ ನಿಯಾಮಕನಾಗಿರುವನು. ವಾಗ್ಯುದ್ಧದಲ್ಲಿ ಅತ್ಯಂತಪ್ರವೀಣ –ರೆಂಬುವರಲ್ಲಿ ಶ್ರೀವಾದಿರಾಜರು ಭೂಮಂಡಲದಲ್ಲಿ ಅರ್ಥಾತ್ ಸರ್ವಲೋಕಗಳಲ್ಲಿ ಅತಿ ಶೂರರು ಮತ್ತು ಋಜುಯೋಗಿಗಳೂ ಆಗಿರುವರು. ಸಾಕ್ಷಾತ್ತಾಗಿ ಶ್ರೀನೃಸಿಂಹನ ಮುಖದಿಂದ ವೇದಾದಿ ಸಚ್ಛಾಸ್ತ್ರವಿದ್ಯೆಗಳನ್ನು ಶ್ರವಣಮಾಡುವರಲ್ಲಿ ಸದಾ ಪ್ರಥಮರು, ಆದರೂ "ಗೋ"ಶಬ್ದದಿಂದ ಹೇಳಲ್ಪಡುವ ಸದ್ವಿದ್ಯೆಗಳ ಅಭಿವ್ಯಕ್ತಿಗಾಗಿ ಶ್ರೀನೃಸಿಂಹನಿಂದ ಪ್ರಶ್ನೆಮಾಡಿ ಆತನ ಪ್ರಸಾದದಿಂದ ಶ್ರೀಹಯಗ್ರೀವವಿದ್ಯಾತ್ಮಕ–ಶ್ರೀಪಂಚವೃಂದಾವನಾಖ್ಯಾನ ಮೊದಲಾದ ಸಕಲವಿದ್ಯೆಗಳನ್ನು ತಿಳಿಯುತ್ತಾರೆ ಮತ್ತು ಶ್ರೀನೃಸಿಂಹನ ಪ್ರಸಾದದಿಂದ ಶ್ರೀಹಯಗ್ರೀವವಿದ್ಯಾತ್ಮಕಶ್ರೀಪಂಚವೃಂದಾವನಾಖ್ಯಾನಾದಿ ಸಕಲವಿದ್ಯೆಗಳ ದಿವ್ಯಜ್ಞಾನ–ಚಕ್ಷುವಿನಿಂದ ಯತಿಶ್ರೇಷ್ಠರಾದ ತಾವು ಸಪತ್ನೀಕರಾದ ಗರುಡಶೇಷ ರುದ್ರಾದಿಸಜ್ಜನರ ಸಮೂಹದಲ್ಲಿ ಶ್ರೀಹಯಗ್ರೀವವಿದ್ಯಾತ್ಮಕಶ್ರೀಪಂಚವೃಂದಾವನಾಖ್ಯಾನಾದಿ ಸಕಲ ವಿದ್ಯೆಗಳ ತತ್ತ್ವಜ್ಞಾನವನ್ನು ಪ್ರತ್ಯಕ್ಷವಾಗಿ





ಮತ್ತು ಸ್ವಪ್ನಮುಖವಾಗಿ ವೃದ್ಧಿಗೊಳಿಸಲು ಸಂಕಲ್ಪಿಸಿ, ಸಜ್ಜನವೃಂದವನ್ನು ಸಲಹುವರೆಂಬ ಅರ್ಥವು ಈ ಶ್ರುತಿಯಿಂದ ಸುಸ್ಪಷ್ಟವಾಗಿ ತಿಳಿದುಬರುತ್ತದೆ. ಜಗದ್ಗುರುಗಳೂ, ಬಳಿತ್ಥಾದಿಮಂತ್ರಪ್ರತಿಪಾದ್ಯರೂ ತತ್ಕಾರಣ ವೈದಿಕಾಚಾರ್ಯರೂ ಆದ ಶ್ರೀವಾದಿರಾಜರು ನಿತ್ಯವಾದ ವೇದದಲ್ಲಿ ವರ್ಣಿತವಾದಂತೆ ನಿತ್ಯವಾದ ರೂಪವಳ್ಳವರು (ವೇದವು ನಿತ್ಯಇತಿಹಾಸವಾದ ಕಾರಣದಿಂದ - "ನಿತ್ಯೇತಿಹಾಸತ್ವಾದ್ ವೇದಸ್ಯ ಪ್ರಾಮಾಣ್ಯಮ್") ಎಂದು ಈ ಮಂತ್ರದಿಂದ ಸಿದ್ಧವಾಗುತ್ತದೆ. ಅಂತತೋಗತ್ವಾ ಶ್ರೀಹಯಗ್ರೀವ ಪ್ರೋಕ್ತವಾದ ಋಕ್ಸಂಹಿತಾದಲ್ಲಿ ವರ್ಣಿತವಾದಂತೆ ಬಳಿತ್ಥಾಸೂಕ್ತಪ್ರತಿಪಾದ್ಯ ಶ್ರೀವಾದಿರಾಜರ ಮೂರುರೂಪಗಳು - ಪ್ರಥಮತ: ರುಕ್ಮಿಣೀಪತ್ರವಾಹಕತ್ವಸೇವಾಧರ್ಮವಾಚರಿಸಿದ "ಅಗ್ನಿದ್ಯೋತನ"ನಾಮಕವಾದಿರಾಜರೂಪವೂ, ಎರಡನೆಯದಾದ ಮಹಾಭಾರತಯುದ್ಧದಲ್ಲಿ ಪಾಲ್ಗೊಂಡ "ಪ್ಲಕ್ಷ"ನಾಮಕವಾದಿರಾಜರೂಪವೂ, ಮೂರನೆಯದಾದ ವಾಗೀಶತೀರ್ಥಕರಕಮಲಸಂಜಾತರಾದ "ದಶಪ್ರಮತಿ"ನಾಮಕವಾದಿರಾಜ ರೂಪವೂ ನಿತ್ಯವಾದವುಗಳು ಮತ್ತು ಪಂಚವೃಂದಾವನವು ನಿತ್ಯವಾದದ್ದು ಎಂದು ಸಿದ್ಧವಾಗುತ್ತದೆ. (ಮತ್ತು "ಅಸ್ತುಶ್ರೌಷಟ್ ಪುರೋ ಅಗ್ನಿಂ" ಎಂಬ ಶ್ರುತಿಪ್ರಮಾಣದಿಂದಲೂ ಶ್ರೀವಾದಿರಾಜರ ಪಂಚವೃಂದಾವನವು ನಿತ್ಯವೂ ಮತ್ತು ವೇದಪ್ರತಿಪಾದ್ಯವು ಎಂದು "ಅಸ್ತುಶ್ರೌಷಡಿತಿ ಪ್ರೋಕ್ತಾ ಕ್ರತುಕೋಟಿಫಲಪ್ರದಾ" ಎಂದು ಸ್ವಯಂ ಶ್ರೀವಾದಿರಾಜರೇ ಶ್ರಿಸ್ವಾಪ್ನವೃಂದಾವನಾಖ್ಯಾನದಲ್ಲಿ ಧೃವೀಕರಿಸಿದರು).

ಪ್ರಕೃತ "ಶ್ರೀಪಂಚವೃಂದಾವನಾಖ್ಯಾನ"ಕೃತಿಯು ಶ್ರೀಮದನುವ್ಯಾಖ್ಯಾನ, ಯುಕ್ತಿಮಲ್ಲಿಕಾದಿ ಗ್ರಂಥಗಳಂತೆ ಸ್ವತ:ಪ್ರಮಾಣವೂ, ಶ್ರೀಮಧ್ವಸಿದ್ಧಾಂತಪ್ರಮೇಯಜ್ಞಾನಸಮುದ್ದೀಪಕವೂ, ಮಣಿಮದಾ-ದಿಸಕಲದುರ್ಮತನಿರಾಕರಣಚಣವೂ, ಪಠಣಶ್ರವಣಮಾತ್ರದಿಂದ ಕಲಿಕಲ್ಮಷಾಪಹವೂ, ಸಕಲ-ಸೌಭಾಗ್ಯಪ್ರದವೂ ಮತ್ತು ಮೋಕ್ಷಪ್ರದವೂ ಆದ ಗ್ರಂಥವು. ಗುರುಗಳ ಅನುಗ್ರಹವಿಲ್ಲದೇ ಅವಗತ-ವಾಗುವುದಿಲ್ಲ. "ಸಮಂ ಸಹಸ್ರಶೀರ್ಷಸ್ಯ ಸೂಕ್ತಸ್ಯ ಪುರುಷಾತ್ಕೃತಮ್" ಎಂಬುವ ವಚನದಿಂದ ವೃಂದಾವನಾಖ್ಯಾನವು ಪುರುಷಸೂಕ್ತಕ್ಕೆ ಸಮವೂ, "ತತ್ತುಲ್ಯಂ ವೇದಶಬ್ದೇನ" ಎಂಬುವ ವಚನದಂತೆ ವೇದಮಂತ್ರತುಲ್ಯವು ಎಂಬುವುದು ಸಿದ್ಧವಾಗುತ್ತದೆ ("ಮಂತ್ರತುಲ್ಯಂ ಮಹಾಗ್ರಂಥಂ ರಚಯಾಮಾಸ ವಾದಿರಾಟ್") ಎಂಬುವುದಾಗಿ ವೇದವಿತ್ತಮರಾದ ನಮ್ಮ ಗುರುಗಳಾದ ಶ್ರೀವಿಶ್ವೋತ್ತಮ-ತೀರ್ಥಶ್ರೀಮಚ್ಚರಣರು ನಿರ್ಣಯಿಸಿ ತಿಳಿಸಿ ಸಾಧಕರಿಗೆ ಪರಮಾನುಗ್ರಹವನ್ನು ಮಾಡಿರುವರು.

ಶ್ರೀಸೋದಾಕ್ಷೇತ್ರದಲ್ಲಿ ಶ್ರೀಗುರುರಾಜರ ಸಮ್ಮುಖದಲ್ಲಿ ಸ್ವರ್ಣವರ್ಣಗಳಿಂದ ಸಂಪೂರ್ಣ ವೃಂದಾವನಾಖ್ಯಾನವನ್ನು ಶಿಲಾಲೇಖನಗೈಸಿದ ನಮ್ಮ ಗುರುಗಳಾದ ಶ್ರೀಶ್ರೀವಿಶ್ವೋತ್ತಮತೀರ್ಥ ಶ್ರೀಪಾದಂಗಳವರು ಅದೇ ವೃಂದಾವನಾಖ್ಯಾನದಲ್ಲಿ ಮಂತ್ರಲಿಂಗಗಳಿಂದ ಸೂಚಿಸಿಲಾದ ಶ್ರೀವಾದಿರಾಜರ ಋಜುತ್ವ ಪ್ರತಿಪಾದಕವಾದ ೧೦೨ ಶ್ರುತಿಗಳಿಗೆ ಪಂಡಿತ ಶ್ರೀಆತ್ಮಕೂರು ಆನಂದತೀರ್ಥಾಚಾರ್ಯರು ರಚಿಸಿದ ಸಚ್ಛಾಸ್ತ್ರಾನುಸಾರಿಯಾದ ಪರಮಾದ್ಭುತ ಮಂತ್ರಭಾಷ್ಯವನ್ನು ಮಧ್ಯವಾಟಮಠದಲ್ಲಿ ಏಳು ದಿನಗಳಪರ್ಯಂತ ಪ್ರವಚನವನ್ನು ಏರ್ಪಡಿಸಿ ತಾವೂ ಸ್ವತಃ ಶ್ರವಣಮಾಡಿ ಪರಮಾನಂದಭರಿತರಾಗಿ ಅದರಲ್ಲಿನ ೩೬ ಋಜುತ್ವಗಮಕ ಶ್ರುತಿಗಳನ್ನು ಮತ್ತು ಇತರ ಪ್ರಮಾಣಗಳನ್ನು ಆಖ್ಯಾನಮಂದಿರದಲ್ಲಿ ಶಿಲಾ-ಲೇಖನಗೈಸಿರುವರು. ಆಖ್ಯಾನ ಶಿಲಾಲೇಖನ ಕಾರ್ಯದಲ್ಲಿ ಮತ್ತು ತದ್ಗತ ಶ್ರುತಿಗಳ ಶಿಲಾಲೇಖನ ಕಾರ್ಯದಲ್ಲೂ ಪಂಡಿತ ಶ್ರೀಆತ್ಮಕೂರು ಆನಂದತೀರ್ಥಾಚಾರ್ಯರು ಅನಿತರಸಾಧ್ಯವಾದ ಸೇವೆಯನ್ನು ಸಲ್ಲಿಸಿ ನಮ್ಮ ಗುರುಗಳ ಪ್ರೀತಿಪಾತ್ರರಾಗಿರುವರು.

**ಪರ್ಯಾಯ ಶ್ರೀ ಸೋದೆ ವಾದಿರಾಜ ಮಠ**

ಶ್ರೀ ಕೃಷ್ಣ ಮಠ, ಉಡುಪಿ

Phone : 0820-2520598

E-mail: paryaya@sode-edu.in



**paryaya shri sode vadiraja matha**

**Sri Krishna Matha, Udupi**

Phone : 0820-2520598

Website: www.sodevadirajamutt.in

ವೃಂದಾವನಾಖ್ಯಾನದ ಮೊದಲ ಹದಿನೇಳು ಅಧ್ಯಾಯಗಳಿಗೆ ಶ್ರೀಮುಷ್ಣಾಚಾರ್ಯರು ವ್ಯಾಖ್ಯಾನವನ್ನು ರಚಿಸಿರುವರು ಮತ್ತು ಉಳಿದ ಐದು ಅಧ್ಯಾಯಗಳಿಗೆ ಬುಕ್ಕೀಬಾಗ್ ಶ್ರೀನಿವಾಸಾಚಾರ್ಯರು (೧೯ನೆಯ ಶತಮಾನದ ಕೊನೆಯಲ್ಲಿದ್ದವರು) ವ್ಯಾಖ್ಯಾನವನ್ನು ರಚಿಸಿರುವರು. ೨೦ನೆಯ ಶತಮಾನದಲ್ಲಿ ಶ್ರೀವಾದಿರಾಜರ ಋಜುತ್ವವನ್ನು ಮಂಡಿಸುವುದರಲ್ಲಿ ಅಗ್ರಗಣ್ಯರಾದ ಮೈಸೂರಿನ ಶ್ರೀಸುಬ್ಬರಾಯ ಸೂರೀಂದ್ರರು ಈ ಎರಡೂ ವ್ಯಾಖ್ಯಾನಗಳನ್ನು ಸಮಗ್ರವಾಗಿ ಅಧ್ಯಯನ ಮಾಡಿ, ಆ ವ್ಯಾಖ್ಯಾನಗಳಿಗೆ ಟಿಪ್ಪಣಿಯನ್ನು ರಚಿಸಿರುವರು ಮತ್ತು ಪ್ರವಚನಾದಿಗಳಮೂಲಕ ಆಖ್ಯಾನದ ಪ್ರಚಾರಕಾರ್ಯದಲ್ಲಿ ಸೇವೆಸಲ್ಲಿಸಿರುವರು.

ಇಂತಹ ಅದ್ಭುತವಾದ ವ್ಯಾಖ್ಯಾನಗಳ ಸಹಿತವಾಗಿ ಶ್ರೀವೃಂದಾವನಾಖ್ಯಾನವು ಶ್ರೀಹರಿಗುರುಗಳ ಅನುಗ್ರಹದಿಂದ ಈಗ ಪ್ರಪ್ರಥಮಬಾರಿಗೆ ಗಣಕೀಕರಣಗೊಂಡು ಮುದ್ರಣಕ್ಕೆ ಸಿದ್ಧವಾಗಿದೆ. ಈ ಪವಿತ್ರಕಾರ್ಯದಲ್ಲಿ ಪ್ರಧಾನಸಂಪಾದಕರಾಗಿ ಸೇವೆ ಸಲ್ಲಿಸಿರುವ ಪಂಡಿತ ಶ್ರೀಆತ್ಮಕೂರು ಆನಂದತೀರ್ಥಾಚಾರ್ಯರು ಈ ಮೇಲ್ಕಂಡ ವ್ಯಾಖ್ಯಾನಗಳನ್ನು ಮತ್ತು ಟಿಪ್ಪಣಿಯನ್ನು ಸಮಗ್ರವಾಗಿ ಸಂಪಾದಿಸಿ, ತಾವೂ ಕೂಡ ಆಖ್ಯಾನದಲ್ಲಿರುವ ಅನೇಕ ತತ್ವಬೋಧಕ ವಚನಗಳಿಗೆ ಸಂವಾದಿಯಾಗಿ ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳಿಂದ, ವಿಷ್ಣುರಹಸ್ಯ ಇತ್ಯಾದಿ ವೈಷ್ಣವಗ್ರಂಥಗಳಿಂದ ಸಂಗ್ರಹಿಸಿ ಅನೇಕ ಅಡಿಟಿಪ್ಪಣಿಗಳನ್ನು ಮತ್ತು ವಿಶೇಷಾರ್ಥಗಳನ್ನು ಬರೆದಿರುವುದು ಸಾಧಕರಿಗೆ ವೃಂದಾವನಾಖ್ಯಾನದ ಅಧ್ಯಯನಕ್ಕೂ ಪ್ರವಚನಕ್ಕೂ ಮತ್ತು ಅನುಷ್ಠಾನಕ್ಕೂ ಬಹು ಉಪಯುಕ್ತವಾಗಿದೆ.

ಜಿಜ್ಞಾಸುಗಳಿಗೆ ಶುಲ್ಕರಹಿತವಾಗಿ ತಲುಪಿಸುವ ಸದುದ್ದೇಶದಿಂದ ಆಧುನಿಕತಂತ್ರಜ್ಞಾನವನ್ನು ಬಳಸಿಕೊಂಡು ಮೊದಲಬಾರಿಗೆ ಈ ಗ್ರಂಥರತ್ನವನ್ನು ಅಂತರ್ಜಾಲದ ಮೂಲಕ ಪ್ರಕಟಿಸಲಾಗಿದೆ. ಇದರ ಉಪಯೋಗವನ್ನು ಸರ್ವಜಿಜ್ಞಾಸುಗಳು ಪಡೆದುಕೊಂಡು ಶ್ರೀಗುರುರಾಜರ ಮತ್ತು ಶ್ರೀಮಧ್ವರಾಜರ ಹೃದಯಾಂತರ್ಯಾಮಿಯಾದ ಶ್ರೀನೃಸಿಂಹನ ಅನುಗ್ರಹಕ್ಕೆ ಪಾತ್ರರಾಗಬೇಕು.

ನಮ್ಮ ಪ್ರಥಮ ಪರ್ಯಾಯದಲ್ಲಿ ಈ ಕೃತಿಯನ್ನು ಸಮರ್ಪಕವಾಗಿ ಹೊರತರುವಲ್ಲಿ ಮುಖ್ಯವಾಗಿ ಸೇವೆಸಲ್ಲಿಸಿರುವ ನಮ್ಮಗುರುಗಳ ಹಾಗೂ ನಮ್ಮ ಪರಮಾನುಗ್ರಹಕ್ಕೆ ಪಾತ್ರರಾದ ಶ್ರೀಆತ್ಮಕೂರು ಆನಂದತೀರ್ಥಾಚಾರ್ಯರನ್ನು ನಾವು ಅಭಿನಂದಿಸುತ್ತೇವೆ. ಅವರಿಂದ ಇದೇರೀತಿಯಾಗಿ ಇನ್ನು ಅನೇಕ ಸೇವೆಗಳನ್ನು ಸ್ವೀಕರಿಸಿ ಶ್ರೀಭೂವರಾಹಾತ್ಮಕ ಶ್ರೀಹಯಗ್ರೀವಾಭಿನ್ನ ಶ್ರೀವೇದವ್ಯಾಸ ದೇವರು, ಶ್ರೀಮಧ್ವರಾಜರು, ಶ್ರೀಗುರುರಾಜರು, ಶ್ರೀಭೂತರಾಜರು ಅವರಿಗೆ ಆಯುರಾರೋಗ್ಯೈಶ್ವರ್ಯಾದಿಗಳನ್ನು ಅನುಗ್ರಹಿಸಲೆಂದು ನಾವು ವಿಶೇಷವಾಗಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ಶ್ರೀಮನ್ನಾರಾಯಣಸ್ಮರಣೆಗಳು

ಶ್ರೀಶ್ರೀವಿಶ್ವವಲ್ಲಭತೀರ್ಥಶ್ರೀಪಾದಂಗಳವರು